# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 994
ಸದಸ್ಯರ ಹೆಸರು : ಶ್ರೀ ಎಸ್.ಎಲ್.ಭೋಜೇಗೌಡ (ಶಿಕ್ಷಕರ ಕ್ಷೇತ್ರ)
ಉತ್ತರಿಸುವ ದಿನಾಂಕ : 21.12.2021
ಉತ್ತರಿಸುವ ಸಚಿವರು : ನಗರಾಭಿವೃದ್ಧಿ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಚಿಕ್ಕಮಗಳೂರು ಜಿಲ್ಲೆಯಲ್ಲಿರುವ ನಗರ ಯೋಜನೆ ಪ್ರಾಧಿಕಾರಗಳು ಯಾವುವು; ಅವುಗಳ ಕಾರ್ಯವ್ಯಾಪ್ತಿಯೇನು; (ಸಂಪೂರ್ಣ ವಿವರ ನೀಡುವುದು) | ಚಿಕ್ಕಮಗಳೂರು ಜಿಲ್ಲೆಯಲ್ಲಿರುವ ಪ್ರಾಧಿಕಾರಗಳು ಈ ಕೆಳಕಂಡಂತಿವೆ.<br>1) ಚಿಕ್ಕಮಗಳೂರು ನಗರಾಭಿವೃದ್ಧಿ ಪ್ರಾಧಿಕಾರ<br>2) ಕಡೂರು ಪುರಸಭೆ ಯೋಜನಾ ಪ್ರಾಧಿಕಾರ<br>3) ಬೀರೂರು ಪುರಸಭೆ ಯೋಜನಾ ಪ್ರಾಧಿಕಾರ<br>4) ತರೀಕೆರೆ ಪುರಸಭೆ ಯೋಜನಾ ಪ್ರಾಧಿಕಾರ |
| ಆ) | ಈ ನಗರ ಯೋಜನೆ ಪ್ರಾಧಿಕಾರಗಳಿಂದ ಯಾವ ಯಾವ ಪ್ರದೇಶಗಳಲ್ಲಿ ವಸತಿ ಬಡಾವಣೆಗಳನ್ನು ನಿರ್ಮಾಣ ಮಾಡಲಾಗಿದೆ; ಈ ಬಡಾವಣೆಗಳಲ್ಲಿ ಎಷ್ಟು ನಿವೇಶನಗಳನ್ನು ನಿರ್ಮಾಣ ಮಾಡಲಾಗಿದೆ; ಇವುಗಳ ವಿಸ್ತೀರ್ಣವೆಷ್ಟು; ಈ ಬಡಾವಣೆಗಳನ್ನು ಯಾವಾಗ . ನಿರ್ಮಾಣ ಮಾಡಲಾಗಿದೆ; (ಬಡಾವಣೆವಾರು ವಿವರ ನೀಡುವುದು) | ಯೋಜನಾ ಪ್ರಾಧಿಕಾರಗಳು ಬಡಾವಣೆ ನಿರ್ಮಾಣ ಮಾಡಿ ನಿವೇಶನ ಹಂಚಿಕೆ ಮಾಡಲು ನಿಯಮಾವಳಿಯಲ್ಲಿ ಅವಕಾಶವಿರುವುದಿಲ್ಲ. ಆದರೆ, ಚಿಕ್ಕಮಗಳೂರು ನಗರಾಭಿವೃದ್ಧಿ ಪ್ರಾಧಿಕಾರದ ವತಿಯಿಂದ ಕೈಗೊಂಡಿರುವ ವಸತಿ ಬಡಾವಣೆ ಯೋಜನೆಗಳ ವಿವರ ಈ ಕೆಳಗಿನಂತಿದೆ:-<br>1. ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಯುಡಿ 367 ಎಂಐಬಿ 89 ದಿನಾಂಕ: 27-05-1991 ರನ್ವಯ ಹಿರೇಮಗಳೂರು ವಸತಿ ಬಡಾವಣೆಯಲ್ಲಿ ಹಿರೇಮಗಳೂರು ಗ್ರಾಮದ ವಿವಿಧ ಸರ್ವೆ ನಂಬರ್‌ಗಳಲ್ಲಿ ಒಟ್ಟು 135 ಎಕರೆ ಜಮೀನಿನಲ್ಲಿ ಭೂ ಸ್ವಾಧೀನದ ಆಧಾರದ ಮೇಲೆ ಅಭಿವೃದ್ಧಿ ಪಡಿಸಿದ ವಸತಿ ಬಡಾವಣೆಯಲ್ಲಿ ಒಟ್ಟು 2065 ವಸತಿ ನಿವೇಶನಗಳನ್ನು ರಚಿಸಲಾಗಿದೆ. ಸದರಿ ಬಡಾವಣೆಗೆ ಸಿವಿಲ್ ಮತ್ತು ವಿದ್ಯುತ್ ಕಾಮಗಾರಿಗಳನ್ನೊಳಗೊಂಡಿದ್ದು, ಸದರಿ ಕಾಮಗಾರಿಗೆ 7.11 ಕೋಟಿ ಗಳಾಗಿದ್ದು, ಈ ಕಾಮಗಾರಿಗಳಿಗೆ ಸರ್ಕಾರದಿಂದ ಯಾವುದೇ ಅನುದಾನ ಬಿಡುಗಡೆಯಾಗಿರುವುದಿಲ್ಲ.<br>2. ಸರ್ಕಾರದ ಆದೇಶ ಸಂಖ್ಯೆ: ನಅಇ 185 ಮೈಅಪ್ರಾ 2011 ದಿನಾಂಕ: 22-12-2012 ರನ್ವಯ ಶ್ರೀ ಎ.ಬಿ.ವಾಜಪೇಯಿ ವಸತಿ ಬಡಾವಣೆಯನ್ನು ಉಪ್ಪಳ್ಳಿ-ಇಂದಾವರ ಗ್ರಾಮಗಳ ವಿವಿಧ ಸರ್ವೆ ನಂಬರ್‌ಗಳಲ್ಲಿ ಒಟ್ಟು 193 ಎಕರೆ ಜಮೀನಿನಲ್ಲಿ ರೈತರ ಸಹಭಾಗಿತ್ವದೊಂದಿಗೆ 60:40 ರ ಅನುಪಾತದಡಿ ವಸತಿ ಯೋಜನೆಯನ್ನು ಅನುಷ್ಠಾನಗೊಳಿಸಿದ್ದು, ಸದರಿ ಬಡಾವಣೆಯಲ್ಲಿ ಒಟ್ಟು 2515 ವಸತಿ ನಿವೇಶನಗಳನ್ನು ರಚಿಸಲಾಗಿದ್ದು, ಶೇ. 40 ರಷ್ಟು ಭೂ ಮಾಲೀಕರಿಗೆ ವಿವಿಧ ಅಳತೆಯ 914 ನಿವೇಶನಗಳನ್ನು ಹಂಚಿಕೆ ಮಾಡಿ, ನೋಂದಣಿ ಮಾಡಿಕೊಡಲಾಗಿರುತ್ತದೆ. 1215 ವಿವಿಧ ಅಳತೆಯ ನಿವೇಶನಗಳನ್ನು ನಿಯಮಾನುಸಾರ ಹಂಚಿಕೆ ಮಾಡಲಾಗಿರುತ್ತದೆ. ಸದರಿ ಬಡಾವಣೆಯ ಕಾಮಗಾರಿಗಳನ್ನು ಹಂತ ಹಂತವಾಗಿ ನಿರ್ವಹಿಸಲು ಮೈಲುಗಲ್ಲು 1 ರಿಂದ 18 ಮೈಲುಗಲ್ಲು ಎಂದು ವಿಂಗಡಿಸಿದ್ದು, ಆ ಪೈಕಿ ಮೈಲುಗಲ್ಲು 1 ರಿಂದ 17 ರವರೆಗೆ ಕಾಮಗಾರಿಯನ್ನು ಪೂರ್ಣಗೊಳಿಸಿದ್ದು, ಸದರಿ ಕಾಮಗಾರಿಗಳ ವೆಚ್ಚ ರೂ. 184.70 ಕೋಟಿ ಗಳಾಗಿದ್ದು, ಸದರಿ ಯೋಜನೆಗೆ ನಾಗಾರ್ಜುನ ಕನ್ಸಟ್ರಕ್ಷನ್ ಕಂಪನಿ ರವರು ಗುತ್ತಿಗೆದಾರರಾಗಿದ್ದು, ಹಾಗೂ ವಾಸ್ತುಶಿಲ್ಪ ಬೆಂಗಳೂರು ರವರು ಪ್ರೊಜೆಕ್ಟ್ ಮ್ಯಾನೇಜ್‌ಮೆಂಟ್ ಕನ್ಸಲ್‌ಟೆಂಟ್ ಆಗಿರುತ್ತಾರೆ. |
| ಇ) | ಈ ಪ್ರಾಧಿಕಾರಿಗಳು ಬಡಾವಣೆಗಳ ಅಭಿವೃದ್ಧಿಗಾಗಿ ಇಲ್ಲಿಯವರೆಗೆ ಕೈಗೊಂಡಿರುವ ಕಾಮಗಾರಿಗಳು ಯಾವುವು; ಈ ಕಾಮಗಾರಿಗಳನ್ನು ಯಾವಾಗ ಪ್ರಾರಂಭಿಸಲಾಗಿದೆ; ಈ ಕಾಮಗಾರಿಗಳ ವೆಚ್ಚವೆಷ್ಟು; ಈ ಕಾಮಗಾರಿಗಳಿಗಾಗಿ ಇಲ್ಲಿಯವರೆಗೆ ಬಿಡುಗಡೆ ಮಾಡಿರುವ ಅನುದಾನವೆಷ್ಟು; ಈ ಕಾಮಗಾರಿಗಳನ್ನು ನಿರ್ವಹಿಸಿರುವ ಗುತ್ತಿಗೆದಾರರ ವಿವರಗಳೇನು? (ಬಡವಾಣೆವಾರು ಮಾಹಿತಿ ನೀಡುವುದು) | |

| | | |
|---|---|---|
| | | 3. ಸರ್ಕಾರದ ಆದೇಶ ಸಂಖ್ಯೆ 427 ಮೈಅಪ್ರಾ 2005 ದಿನಾಂಕ: 05-01-2009 ರನ್ವಯ ಹಿರೇಮಗಳೂರು ಹೆಚ್ಚುವರಿ ವಸತಿ ಬಡಾವಣೆಯಲ್ಲಿ ಹಿರೇಮಗಳೂರು ಗ್ರಾಮ ವಿವಿಧ ಸರ್ವೆ ನಂಬರ್‌ಗಳಲ್ಲಿ ಒಟ್ಟು 17½ ಎಕರೆ ಜಮೀನಿನಲ್ಲಿ ಪರಸ್ಪರ ಒಪ್ಪಂದ ಮತ್ತು ಭೂಸ್ವಾಧೀನದ ಆಧಾರದ ಮೇಲೆ ಅಭಿವೃದ್ಧಿ ಪಡಿಸಿದ ವಸತಿ ಬಡಾವಣೆಯಲ್ಲಿ ಒಟ್ಟು 283 ವಸತಿ ನಿವೇಶನಗಳನ್ನು ರಚಿಸಲಾಗಿರುತ್ತದೆ. ಸದರಿ ಬಡಾವಣೆಗೆ ಎಲ್ಲಾ ಮೂಲಭೂತ ಸೌಕರ್ಯಗಳನ್ನೊಳಗೊಂಡ ಸಿವಿಲ್ ಮತ್ತು ವಿದ್ಯುತ್ ಕಾಮಗಾರಿಗಳನ್ನು ನಿರ್ವಹಿಸುತ್ತಿದ್ದು, ಸದರಿ ಕಾಮಗಾರಿಗಳಿಗೆ ತಗಲುವ ವೆಚ್ಚ ರೂ. 6.68 ಕೋಟಿ ಗಳಾಗಿರುತ್ತದೆ.<br>ಮೇಲ್ಕಂಡ ಕಾಮಗಾರಿಗಳನ್ನು ನಿರ್ವಹಿಸಿರುವ ಗುತ್ತಿಗೆದಾರರ ವಿವರ ಈ ಕೆಳಕಂಡಂತಿರುತ್ತದೆ. |

| ಕ್ರ ಸಂ. | ಕಾಮಗಾರಿಯ ವಿವರ | ಗುತ್ತಿಗೆದಾರರ ಹೆಸರು |
|---|---|---|
| 1 | ಹಿರೇಮಗಳೂರು ಹೆಚ್ಚುವರಿ ವಸತಿ ಬಡಾವಣೆಯಲ್ಲಿ ನಿವೇಶನಗಳಿಗೆ ಕಲ್ಲು ಹಾಕಿಸಿದ ಕಾಮಗಾರಿ. | ಶ್ರೀ ಎಸ್. ಕುಮಾರ್. |
| 2 | ಹಿರೇಮಗಳೂರು ಹೆಚ್ಚುವರಿ ವಸತಿ ಬಡಾವಣೆಯಲ್ಲಿ ಡಾಂಬರ್ ರಸ್ತೆ ನಿರ್ಮಾಣ ಕಾಮಗಾರಿ. ರಸ್ತೆ ಸಂಖ್ಯೆ: 5 ರಿಂದ 7 ರ ವರೆಗೆ. | ಶ್ರೀ ಕೆ.ಎಸ್. ರಾಜು |
| 3 | ಹಿರೇಮಗಳೂರು ಹೆಚ್ಚುವರಿ ವಸತಿ ಬಡಾವಣೆಯಲ್ಲಿ ಕಾಂಕ್ರೀಟ್ ಬಾಕ್ಸ್ ಚರಂಡಿ ನಿರ್ಮಾಣ ಕಾಮಗಾರಿ. ರಸ್ತೆ ಸಂಖ್ಯೆ: 8 ರಿಂದ 11 ರ ವರೆಗೆ. | ಶ್ರೀ ಸಿ.ಎಂ. ಲೋಹಿತ್ ಕುಮಾರ್ |
| 4 | ಹಿರೇಮಗಳೂರು ಹೆಚ್ಚುವರಿ ವಸತಿ ಬಡಾವಣೆಯಲ್ಲಿ 9ಮೀ, 12 ಮೀ, 18 ಮೀ ರಸ್ತೆಗೆ ಕಾಂಕ್ರೀಟ್ ಮೋರಿ ನಿರ್ಮಾಣ ಕಾಮಗಾರಿ. | ಶ್ರೀ ಹೆಚ್.ಸಿ. ಶಶಿಪ್ರಸಾದ್ |
| 5 | ಹಿರೇಮಗಳೂರು ಹೆಚ್ಚುವರಿ ವಸತಿ ಬಡಾವಣೆಯಲ್ಲಿ ಡಾಂಬರ್ ರಸ್ತೆ ಕಾಮಗಾರಿ. ರಸ್ತೆ ಸಂಖ್ಯೆ: 16 ರಿಂದ 19 ರ ವರೆಗೆ. | ಶ್ರೀ ರಂಗಯ್ಯ |
| 6 | ಹಿರೇಮಗಳೂರು ಹೆಚ್ಚುವರಿ ವಸತಿ ಬಡಾವಣೆಯಲ್ಲಿ 14 ರಿಂದ 25 ನೀರು ಸರಬರಾಜು ನಿರ್ಮಾಣ ಕಾಮಗಾರಿ. | ಶ್ರೀ ನಾಗರಾಜ್ ರವಿಕುಮಾರ್ |
| 7 | ಹಿರೇಮಗಳೂರು ಹೆಚ್ಚುವರಿ ವಸತಿ ಬಡಾವಣೆಯಲ್ಲಿ ಡಾಂಬರ್ ರಸ್ತೆ ನಿರ್ಮಾಣ ಕಾಮಗಾರಿ. ರಸ್ತೆ ಸಂಖ್ಯೆ: 13 ರಿಂದ 15 ರ ವರೆಗೆ. | ಶ್ರೀ ಭೀಮೇಶ್ |
| 8 | ಹಿರೇಮಗಳೂರು ಹೆಚ್ಚುವರಿ ವಸತಿ ಬಡಾವಣೆಯಲ್ಲಿ ರಸ್ತೆ ನಿರ್ಮಾಣ ಕಾಮಗಾರಿ. ರಸ್ತೆ ಸಂಖ್ಯೆ: 21 ಬಿ ವರೆಗೆ. | ಶ್ರೀ ಡಿ.ಎ. ಪ್ರಕಾಶ್ |
| 9 | ಹಿರೇಮಗಳೂರು ಹೆಚ್ಚುವರಿ ವಸತಿ ಬಡಾವಣೆಯಲ್ಲಿ ಒಳಚರಂಡಿ ನಿರ್ಮಾಣ ಕಾಮಗಾರಿ. ರಸ್ತೆ ಸಂಖ್ಯೆ: 01 ರಿಂದ 09 ರ ವರೆಗೆ. | ಶ್ರೀ ಅಣ್ಣವೇಲು |

**ಹಿರೇಮಗಳೂರು ಹೆಚ್ಚುವರಿ ವಸತಿ ಬಡಾವಣೆಯ ಕಾಮಗಾರಿಗಳ ವೆಚ್ಚ**

1. **ಸಿವಿಲ್ ಕಾಮಗಾರಿಯ ವೆಚ್ಚ ರೂ. 3,95,14,038 /-**
2. **ವಿದ್ಯುತ್ ಕಾಮಗಾರಿಯ ವೆಚ್ಚ ರೂ. 2,73,00,000/-**

**ಒಟ್ಟು 6,68,14,038 /-**

**ಕಡತ ಸಂಖ್ಯೆ: ನಅಇ 478 ಮೈಅಪ್ರಾ 2021(ಇ)**

(ಬಿ.ಎ. ಬಸವರಾಜ)
ನಗರಾಭಿವೃದ್ಧಿ ಸಚಿವರು.

(ಬಿ.ಎ. ಬಸವರಾಜ)
ನಗರಾಭಿವೃದ್ಧಿ ಸಚಿವರು